ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಕಪಾಲ ಬೆಟ್ಟದಲ್ಲಿ ಯೇಸು ಪ್ರತಿಮೆ ಕುರಿತು

ಶ್ರೀ ಎನ್.ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) :-

1200 (1332) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕನಕಪುರ ತಾಲ್ಲೂಕಿನ ಹಾರೋಬಲೆಯ ಕಪಾಲ ಬೆಟ್ಟವು ಗೋಮಾಳವಾಗಿದ್ದು, ಸದರಿ ಜಾಗದಲ್ಲಿ ಖಾಯಂ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲು ನಿಯಮದಲ್ಲಿ ಅವಕಾಶವಿದೆಯೇ; ಈ ಜಾಗವನ್ನು ಬೇರೆ ಉಪಯೋಗಕ್ಕೆ ಪರಿವರ್ತಿಸುವ ಮೊದಲೇ

ಸದರಿ ಜಾಗದಲ್ಲಿ ನಿರ್ಮಾಣ ಕಾರ್ಯಗಳು ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಯಾವುದೇ ಅನುಮತಿ ಇಲ್ಲದೆ ನಿರ್ಮಾಣ ಕಾರ್ಯ ಕೈಗೊಳ್ಳಲು ಸಹಕರಿಸಿದ ಅಧಿಕಾರಿಯ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; ನಿಯಮದ ಪ್ರತಿಯೊಂದಿಗೆ ಮಾಹಿತಿ ನೀಡುವುದು;

(ಆ) ಸದರಿ ಜಮೀನನ್ನು ಪಡೆದುಕೊಂಡಿರುವ ಕಪಾಲ ಬೆಟ್ಟ ಅಭಿವೃದ್ದಿ ಟ್ರಸ್ಟ್ ಜಮೀನು ಪರಿವರ್ತನೆ ಕೋರಿ ಯಾವಾಗ ಅರ್ಜಿ ಸಲ್ಲಿಸಿರುತ್ತಾರೆ; ಸದರಿ ಜಮೀನನ್ನು ಯಾವ ರೀತಿಯ ಉಪಯೋಗಕ್ಕಾಗಿ ಪರಿವರ್ತಿಸಲಾಗಿದೆ; ಗೋಮಾಳ ಜಮೀನನ್ನು ಯಾವುದೇ ಬೇರೆ ರೀತಿಯ ಉಪಯೋಗಕ್ಕೆ ಅನುವಾಗುವಂತೆ ಪರಿವರ್ತಿಸಲು ಇರುವ ನಿಯಮಗಳೇನು; (ಮಾಹಿತಿಯೊಂದಿಗೆ ಪ್ರತಿಯನ್ನು ನೀಡುವುದು)

(ಇ) ಗೋಮಾಳ ಜಮೀನಿನಲ್ಲಿ ಅಕ್ರಮವೆಸಗಲು ಸಹಕರಿಸಿದ ಅಧಿಕಾರಿಯನ್ನು ಅಮಾನತ್ತು ಮಾಡಲಾಗಿದೆಯೇ; ಸರ್ಕಾರ ಸಾರ್ವಜನಿಕ ಸ್ಥಳವನ್ನು ಅಕ್ರಮವಾಗಿ ಅಕ್ರಮಿಸಲು ಸಹಕರಿಸಿದ ಅಧಿಕಾರಿಯ ಮೇಲೆ ಕ್ರಿಮಿನಲ್ ಪ್ರಕರಣ ದಾಖಲಿಸಲಾಗಿದೆಯೇ; ಇಲ್ಲವಾದಲ್ಲಿ, ಎಂದು ಕ್ರಿಮಿನಲ್ ಮೊಕದ್ದಮೆ ದಾಖಲಿಸ-ಲಾಗುವುದು;

(ಈ) ಕನಕಪುರ ತಾಲ್ಲೂಕಿನಲ್ಲಿ ಕಳೆದ 5 ವರ್ಷಗಳ ಹಿಂದೆ ಎಷ್ಟು ಎಕರೆ ಗೋಮಾಳ ಜಮೀನು ಇತ್ತು; ಪ್ರಸ್ತುತ ಎಷ್ಟು ಎಕರೆ ಗೋಮಾಳ ಜಮೀನು ಇದೆ ಎಂಬುದರ ಸಂಪೂರ್ಣ ಮಾಹಿತಿ ನೀಡುವುದು; ಸರ್ವೇ ನಂಬರ್ ಸಹಿತ ಮಾಹಿತಿ ನೀಡುವುದು;

(ಉ) ಕಳೆದ 5 ವರ್ಷಗಳಲ್ಲಿ ಕನಕಪುರ ತಾಲ್ಲೂಕಿನಲ್ಲಿ ಎಷ್ಟು ಎಕರೆ ಗೋಮಾಳ ಜಮೀನನ್ನು ಖಾಸಗಿ ಸಂಸ್ಥೆಗಳಿಗೆ ಮಂಜೂರು ಮಾಡಲಾಗಿದೆ; ಯಾವ ಕಾರಣಕ್ಕೆ ಮಂಜೂರು ಮಾಡಲಾಗಿದೆ; ಸರ್ವೇ ನಂಬರ್ ಸಮೇತ ವಿವರ ನೀಡುವುದು ?